CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೧೩, ೨೦೦೪ (ವೈಶಾಖ ೨೩, ಶಕ ವರ್ಷ ೧೯೨೬) | ಸಂಚಿಕೆ ೨೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನೂತನವಾಗಿ ರಚಿಸಿರುವ ಜಿಲ್ಲೆಗಳಾದ ಬಾಗಲಕೋಟೆ, ದಾವಣಗೆರೆ, ಗದಗ, ಹಾವೇರಿ, ಚಾಮರಾಜನಗರ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಜಿಲ್ಲಾ ಗ್ರಾಹಕರ ವೇದಿಕೆಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**
1. ಮಾನ್ಯ ಭಾರತ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 1141/88 ಮತ್ತು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 742/90, ದಿನಾಂಕ: 5.8.1991ರ ತೀರ್ಪು.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 42 ಎಲ್‌ಆರ್‌ಡಿ 87 (ಭಾಗ-3) ದಿನಾಂಕ: 2.8.1997 ಮತ್ತು 4.8.1997.
3. ಸರ್ಕಾರದ ಆದೇಶ ಸಂಖ್ಯೆ: ಆನಾಸ 128 ಸಲಫ 97, ದಿನಾಂಕ: 26.2.2002.
4. ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಇವರ ಪತ್ರ ಸಂಖ್ಯೆ: ಕರಾಆ/ ಆಡಳಿತ/16/1999-2000, ದಿನಾಂಕ: 28.2.2002.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಮಾನ್ಯ ಭಾರತ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 1141/88 ರೊಂದಿಗಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 742/90 ರಲ್ಲಿ ದಿನಾಂಕ: 5.8.1991 ರಂದು ನೀಡಿರುವ ತೀರ್ಪಿನಲ್ಲಿ ಜಿಲ್ಲೆಯಲ್ಲಿ ಕನಿಷ್ಠ 150 ಪ್ರಕರಣಗಳು ಸರಾಸರಿ 6 ತಿಂಗಳವರೆಗೆ ಮುಂದುವರೆದಲ್ಲಿ, ಅಂತಹ ಜಿಲ್ಲೆಯಲ್ಲಿ ಹೊಸದಾದ ಜಿಲ್ಲಾ ವೇದಿಕೆಯನ್ನು ಸ್ಥಾಪಿಸಬಹುದೆಂದು ಸೂಚಿಸಿದೆ.

ಮೇಲೆ (2)ರಲ್ಲಿ ಓದಲಾದ ಕಂದಾಯ ಇಲಾಖೆಯ ಅಧಿಸೂಚನೆ ದಿನಾಂಕ: 2.8.1997 ಮತ್ತು 4.8.1997ರಲ್ಲಿ ರಾಜ್ಯದಲ್ಲಿ ಹೊಸದಾಗಿ ಚಾಮರಾಜನಗರ, ಬಾಗಲಕೋಟೆ, ದಾವಣಗೆರೆ, ಗದಗ, ಹಾವೇರಿ, ಕೊಪ್ಪಳ ಮತ್ತು ಉಡುಪಿ ಜಿಲ್ಲೆಗಳನ್ನು ಸೃಜಿಸಿ, ಆದೇಶ ಹೊರಡಿಸಿದೆ.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ, ಉಡುಪಿ ಜಿಲ್ಲೆಯಲ್ಲಿ ಹೊಸದಾಗಿ ಜಿಲ್ಲಾ ಗ್ರಾಹಕರ ವೇದಿಕೆಯನ್ನು ಸ್ಥಾಪಿಸಲು ಆದೇಶ ಹೊರಡಿಸಲಾಗಿದೆ. ಅಲ್ಲದೇ, ಬೆಂಗಳೂರು ಜಿಲ್ಲೆಯಲ್ಲಿ ಪ್ರಸ್ತುತ ಒಂದು ಜಿಲ್ಲಾ ವೇದಿಕೆ ಹಾಗೂ 1 ಮತ್ತು 2 ಅಪರ ಜಿಲ್ಲಾ ವೇದಿಕೆಗಳಿದ್ದು, ಸದರಿ ಜಿಲ್ಲೆಯ ಕಾರ್ಯಭಾರವನ್ನು ಗಮನದಲ್ಲಿಟ್ಟುಕೊಂಡು, 3 ಮತ್ತು 4ನೇ ಅಪರ ಜಿಲ್ಲಾ ಗ್ರಾಹಕರ ವೇದಿಕೆಗಳನ್ನೂ ಸಹ ಸ್ಥಾಪಿಸಲು ಆದೇಶ ಹೊರಡಿಸಿದೆ.

ಮೇಲೆ (4)ರಲ್ಲಿ ಓದಲಾದ ರಾಜ್ಯ ಗ್ರಾಹಕರ ಆಯೋಗದ ಪತ್ರದಲ್ಲಿ, ಹೊಸದಾಗಿ ಸೃಜಿಸಿದ ಜಿಲ್ಲೆಗಳ ಪೈಕಿ ಉಡುಪಿ ಜಿಲ್ಲೆಯನ್ನು ಹೊರತುಪಡಿಸಿ, ಉಳಿದ 6 ಜಿಲ್ಲೆಗಳಲ್ಲಿ ಜಿಲ್ಲಾ ವೇದಿಕೆಗಳನ್ನು ಸ್ಥಾಪಿಸಲು ಬೇಕಾಗುವ ಸಿಬ್ಬಂದಿಯ ವಿವರಗಳೊಂದಿಗೆ ಆವರ್ತಕ ಮತ್ತು ಅನಾವರ್ತ ವೆಚ್ಚದ ವಿವರಗಳನ್ನು ಒದಗಿಸಿರುತ್ತಾರೆ.

ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 128 ಸಲಫ 97 (ಭಾಗ), ಬೆಂಗಳೂರು, ದಿನಾಂಕ: 29ನೇ ಜೂನ್ 2002**

ಕರ್ನಾಟಕ ರಾಜ್ಯದ ಹೊಸ ಜಿಲ್ಲೆಗಳಾದ ಬಾಗಲಕೋಟೆ, ಚಾಮರಾಜನಗರ, ದಾವಣಗೆರೆ, ಗದಗ, ಹಾವೇರಿ ಮತ್ತು ಕೊಪ್ಪಳ ಜಿಲ್ಲೆಗಳಿಗೆ ತಲಾ ಒಂದು ಜಿಲ್ಲಾ ಗ್ರಾಹಕರ ವೇದಿಕೆಯನ್ನು, ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ, ತಕ್ಷಣದಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಮಂಜೂರು ಮಾಡಿದೆ.

| ಕ್ರಮ ಸಂಖ್ಯೆ | ಪ್ರತಿ ಜಿಲ್ಲಾ ಗ್ರಾಹಕರ ವೇದಿಕೆಗೆ ಮಂಜೂರಾದ ಹುದ್ದೆಯ ಹೆಸರು | ವೇತನ ಶ್ರೇಣಿ | ಪ್ರತಿ ಜಿಲ್ಲಾ ಗ್ರಾಹಕರ ವೇದಿಕೆಗೆ ಮಂಜೂರು ಮಾಡಿರುವ ಹುದ್ದೆಗಳ ಸಂಖ್ಯೆ | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಅಧ್ಯಕ್ಷರು | ಜಿಲ್ಲಾ ನ್ಯಾಯಾಧೀಶರ ವೇತನ ಶ್ರೇಣಿ | 01 | 06 |
| 2 | ಮಹಿಳಾ ಸದಸ್ಯರು | ಮಾಸಿಕ ರೂ.3,300-00 ಸಂಚಿತ ಗೌರವಧನ | 01 | 06 |
| 3 | ಸದಸ್ಯರು | ಮಾಸಿಕ ರೂ. 3,300-00 ಸಂಚಿತ ಗೌರವಧನ | 01 | 06 |
| 4 | ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿಗಳು | ರೂ. 6000-1120 | 01 | 06 |
| 5 | ಶಿರಸ್ತೇದಾರ್ | ರೂ. 5200-9580 | 01 | 06 |
| 6 | ಪ್ರಥಮ ದರ್ಜೆ ಸಹಾಯಕರು | ರೂ. 3850-7050 | 01 | 06 |
| 7 | ಶೀಘ್ರಲಿಪಿಗಾರರು | ರೂ. 3850-7050 | 02 | 12 |
| 8 | ದ್ವಿತೀಯ ದರ್ಜೆ ಸಹಾಯಕರು | ರೂ. 3000-5450 | 01 | 06 |
| 9 | ಗ್ರೂಪ್-ಡಿ | ರೂ. 2500-3850 | 03 | 18 |
| | | **ಒಟ್ಟು** | **12** | **72** |

2. ಮೇಲ್ಕಂಡ ಹುದ್ದೆಗಳು ತಾತ್ಕಾಲಿಕ ಹುದ್ದೆಗಳಾಗಿದ್ದು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.3.2002 ರವರೆಗೆ ಅಸ್ತಿತ್ವದಲ್ಲಿರುತ್ತವೆ.

3. ಅವಶ್ಯವಿದ್ದ ಕಡೆ ಜಿಲ್ಲಾ ವೇದಿಕೆಗಳಿಗೆ ಸ್ಥಳಾವಕಾಶ ಒದಗಿಸಲು ಸೂಕ್ತ ಕಟ್ಟಡವನ್ನು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿಯೊಂದಿಗೆ ಬಾಡಿಗೆಗೆ ಪಡೆಯಬಹುದು.

4. ಪ್ರತಿ ಹೊಸ ಜಿಲ್ಲಾ ವೇದಿಕೆಗೆ ಕೆಳಕಂಡಂತೆ ಆವರ್ತಕ/ ಅನಾವರ್ತಕ ವೆಚ್ಚವನ್ನು ಅಂದಾಜು ಮಾಡಲಾಗಿದೆ. ಆವರ್ತಕ ವೆಚ್ಚಗಳನ್ನು ದಿನಾಂಕ: 1.7.2002 ರಿಂದ 31.3.2002ರ ಅವಧಿಗೆ ಅಂದಾಜು ಮಾಡಿದೆ;

**i) ಆವರ್ತಕ ವೆಚ್ಚ (9 ತಿಂಗಳಿಗೆ)** (ರೂ.ಗಳಲ್ಲಿ)

| | | |
|---|---|---|
| (ಅ) | ವೇತನ ಮತ್ತು ಭತ್ಯೆಗಳು | 9,00,000-00 |
| (ಆ) | ಲೇಖನ ಸಾಮಗ್ರಿಗಳು | 9,000-00 |
| (ಇ) | ಕಟ್ಟಡ ಬಾಡಿಗೆ | 72,000-00 |
| (ಈ) | ಸಾದಿಲ್ವಾರು ವೆಚ್ಚ | 54,000-00 |
| | **(i) ಒಟ್ಟು ಆವರ್ತಕ** | **10,35,000-00** |

**ii) ಅನಾವರ್ತಕ ವೆಚ್ಚ**

| | | |
|---|---|---|
| (ಅ) | ಪೀಠೋಪಕರಣಗಳು | 2,00,000-00 |
| (ಆ) | ಗ್ರಂಥಾಲಯ ವೆಚ್ಚ | 1,00,000-00 |
| | **(ii) ಒಟ್ಟು ಅನಾವರ್ತಕ** | **3,00,000-00** |

**iii) ಒಟ್ಟು ಆವರ್ತಕ + ಅನಾವರ್ತಕ 13,35,000-00**

5. ಮೇಲಿನ ಅಂದಾಜಿನಂತೆ 6 ಜಿಲ್ಲಾ ವೇದಿಕೆಗಳಿಗೆ ರೂ. 80,10,000-00 (ರೂಪಾಯಿ ಎಂಭತ್ತು ಲಕ್ಷ ಮತ್ತು ಹತ್ತು ಸಾವಿರಗಳು) ಅನುದಾನವನ್ನು 2002-03 ಸಾಲಿಗೆ ಮಂಜೂರು ಮಾಡಿದೆ. ಈ ಅನುದಾನವನ್ನು 2002-03ನೇ ಸಾಲಿನ ಪೂರಕ ಅಂದಾಜುಗಳ ಮೊದಲನೇ ಕಂತಿನಲ್ಲಿ ಒದಗಿಸಲಾಗುವುದು.

6. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "3456-00-800-0-05- ಗ್ರಾಹಕರ ವೇದಿಕೆಗಳು (ಯೋಜನೆ) (ಪುರಸ್ಕೃತ)" ಇದರಡಿ ಭರಿಸುವುದು.

7. ರಿಜಿಸ್ಟ್ರಾರ್-ಕಂ-ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು, ಇವರು ಈ 6 ಜಿಲ್ಲಾ ವೇದಿಕೆಗಳನ್ನು ಸ್ಥಾಪಿಸಲು ಸರ್ಕಾರ ಹೊರಡಿಸಬೇಕಾದ ಅಧಿಸೂಚನೆಗಳ ಬಗ್ಗೆ ಸೂಕ್ತ ಸಮಯದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಕಳುಹಿಸಿಕೊಡತಕ್ಕದ್ದು.

8. ಈ ಆದೇಶವನ್ನು ದಿನಾಂಕ: 4.5.2002ರ ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 9 ಐಎಂಎಂ 2002ರಲ್ಲಿ ಯೋಜನಾ ಇಲಾಖೆ ನೀಡಿರುವ ಹಾಗೂ ದಿನಾಂಕ: 11.6.2002ರ ತನ್ನ ಅ.ಟಿ. ಸಂಖ್ಯೆ: ಎಫ್‌ಡಿ 231 ಬಿಸಿಸಿ 2002ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗುತ್ತಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-3 ಶಾಖೆ,

ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.456

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಕೃಷಿ ಇಲಾಖೆಗೆ ಸಂಬಂಧಿಸಿದಂತೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ರಚನೆ ಆದೇಶ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 4 ಕೃಪಬ 97 ದಿನಾಂಕ: 7.7.97.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಕೃಷಿ ಇಲಾಖೆಯ ಹುದ್ದೆಗಳಿಗೆ ಜ್ಯೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ಮುಂಬಡ್ತಿ ನೀಡುವ ಉದ್ದೇಶಗಳಿಗಾಗಿ ಕೃಷಿ ಇಲಾಖೆಯ ಮುಂಬಡ್ತಿ ಸಮಿತಿಗಳನ್ನು ಈ ಕೆಳಕಂಡಂತೆ ರಚಿಸಿ, ಆದೇಶ ಹೊರಡಿಸಲಾಗಿತ್ತು.

1) **ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಮತ್ತು ಹೆಚ್ಚಿನ ವೇತನ ಶ್ರೇಣಿಯ 'ಎ' ಸಮೂಹದ ಹುದ್ದೆಗಳಿಗೆ ಮುಂಬಡ್ತಿ ನೀಡಲು:**
   - (ಅ) ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಅಧ್ಯಕ್ಷರು
   - (ಆ) ಕೃಷಿ ಇಲಾಖೆಯ ನಿರ್ದೇಶಕರು : ಸದಸ್ಯರು
   - (ಇ) ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದಿರುವ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ : ಸದಸ್ಯರು

2) **ಕೃಷಿ ಇಲಾಖೆಯ 'ಬಿ' ಅಥವಾ 'ಸಿ' ಸಮೂಹ ನೌಕರರುಗಳನ್ನು 'ಎ' ಸಮೂಹದ ಹುದ್ದೆಗಳಿಗೆ (ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಹಾಗೂ ಹೆಚ್ಚಿನ ವೇತನ ಶ್ರೇಣಿಯ 'ಎ' ಸಮೂಹದ ಹುದ್ದೆಗಳನ್ನು ಹೊರತುಪಡಿಸಿ) ಮತ್ತು 'ಸಿ' ಸಮೂಹದ ನೌಕರರಿಗೆ 'ಬಿ' ಸಮೂಹದ ಹುದ್ದೆಗೆ ಮುಂಬಡ್ತಿ ನೀಡಲು.**
   - (ಅ) ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಅಧ್ಯಕ್ಷರು
   - (ಆ) ಕೃಷಿ ಇಲಾಖೆಯ ನಿರ್ದೇಶಕರು : ಸದಸ್ಯರು
   - (ಇ) ಉಪ ಕಾರ್ಯದರ್ಶಿ : ಜಂಟಿ ಕಾರ್ಯದರ್ಶಿ: ಅಪರ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಸದಸ್ಯರು

ಕೃಷಿ ಇಲಾಖೆಯಲ್ಲಿ ಕೃಷಿ ಆಯುಕ್ತರ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ: ಕೃತೋಇ 69 ಕೃಪವ 98, ದಿನಾಂಕ: 25.7.1998 ರಂದು ಸೃಜಿಸಿ, ಈ ಹುದ್ದೆಯನ್ನು ಮುಂದುವರಿಸಿಕೊಂಡು ಬರುತ್ತಿರುವುದರಿಂದ, ಕೃಷಿ ನಿರ್ದೇಶಕರ ಬದಲಿಗೆ ಕೃಷಿ ಆಯುಕ್ತರನ್ನು ಇಲಾಖಾ ಮುಂಬಡ್ತಿ ಸಮಿತಿ ಸಭೆಯ ಸದಸ್ಯರನ್ನಾಗಿ ನೇಮಿಸುವುದು ಅವಶ್ಯವಾಗಿದ್ದು, ದಿನಾಂಕ: 7.7.1997ರ ಇಲಾಖಾ ಮುಂಬಡ್ತಿ ಸಮಿತಿಯ ಆದೇಶ ಮಾರ್ಪಡಿಸಿ, ಈ ಕೆಳಕಂಡಂತೆ ರಚಿಸಿ, ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 38 ಕೃಪವ 2004, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕೃಷಿ ಇಲಾಖೆಯ ಮುಂಬಡ್ತಿ ಸಮಿತಿಗಳನ್ನು ಈ ರೀತಿ ಪುನರ್ ರಚಿಸಿ ಆದೇಶಿಸಲಾಗಿದೆ.

1) **ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಮತ್ತು ಹೆಚ್ಚಿನ ವೇತನ ಶ್ರೇಣಿಯ 'ಎ' ಸಮೂಹದ ಹುದ್ದೆಗಳಿಗೆ ಮುಂಬಡ್ತಿ ನೀಡಲು:**
   - (ಅ) ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಅಧ್ಯಕ್ಷರು
   - (ಆ) ಕೃಷಿ ಆಯುಕ್ತರು : ಸದಸ್ಯರು
   - (ಇ) ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದಿರುವ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ. : ಸದಸ್ಯರು

2) **ಕೃಷಿ ಇಲಾಖೆಯ 'ಬಿ' ಅಥವಾ 'ಸಿ' ಸಮೂಹ ನೌಕರರುಗಳನ್ನು 'ಎ' ಸಮೂಹದ ಹುದ್ದೆಗಳಿಗೆ (ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಹಾಗೂ ಹೆಚ್ಚಿನ ವೇತನ ಶ್ರೇಣಿಯ 'ಎ' ಸಮೂಹದ ಹುದ್ದೆಗಳನ್ನು ಹೊರತುಪಡಿಸಿ) ಮತ್ತು 'ಸಿ' ಸಮೂಹದ ನೌಕರರಿಗೆ 'ಬಿ' ಸಮೂಹದ ಹುದ್ದೆಗೆ ಮುಂಬಡ್ತಿ ನೀಡಲು.**
   - (ಅ) ಕಾರ್ಯದರ್ಶಿ: ಪ್ರಧಾನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಅಧ್ಯಕ್ಷರು
   - (ಆ) ಕೃಷಿ ಆಯುಕ್ತರು : ಸದಸ್ಯರು
   - (ಇ) ಉಪ ಕಾರ್ಯದರ್ಶಿ : ಜಂಟಿ ಕಾರ್ಯದರ್ಶಿ: ಅಪರ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. : ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್.455

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಡಿ. ಬಸವರಾಜು, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ ಸಿಆಸುಇ 97 ಎಸ್‌ಇಎನ್ 2003, ದಿನಾಂಕ: 18.10.2003.

2. ಶ್ರೀ ಡಿ. ಬಸವರಾಜು, ಕೆ. ಎ.ಎಸ್. ಅಧಿಕಾರಿ ಅವರ ಉತ್ತರ ದಿನಾಂಕ: 29.11.2003.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲೆ, ಕೃಷ್ಣರಾಜಪುರ ನಗರ ಸಭೆ ವಾರ್ಡ್ ನಂ. 15 ರಿಂದ 21 ರವರೆಗಿನ ಚುನಾವಣಾಧಿಕಾರಿಯಾಗಿ, ಕಾರ್ಯನಿರ್ವಹಿಸುತ್ತಿದ್ದಾಗ ಅಭ್ಯರ್ಥಿಯ ಸಹಿ ಇಲ್ಲದೇ ನೋಟರಿಯಿಂದ ದೃಢೀಕರಿಸಲ್ಪಟ್ಟು ಘೋಷಣಾ ಪತ್ರವನ್ನು ಆಕ್ಷೇಪಣೆಯ ನಡುವೆಯೂ ಸ್ವೀಕರಿಸಿ ನಾಮ ಪತ್ರವನ್ನು ಅಂಗೀಕರಿಸುವ ಮೂಲಕ ದುರ್ನಡತೆ ಎಸಗಿದ ಆರೋಪಕ್ಕಾಗಿ ಡಿ. ಬಸವರಾಜು, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 18.10.2003ರ ನೋಟೀಸ್ ನೀಡಿ ವಿವರಣೆ ಕೇಳಲಾಯಿತು. ಈ ನೋಟೀಸ್‌ಗೆ ಆರೋಪಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 29.11.2003ರ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ. ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಡಿ. ಬಸವರಾಜು, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ, ನಡೆಸುವ ಸಲುವಾಗಿ ಶ್ರೀ ಎಸ್. ಎಸ್. ಸಂಗೋಳ್ಳಿ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.4.1998 ರಂತೆ ಗೌರವ ಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಂತೆ ವಾಹನ ಭತ್ಯೆಗಳನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಬೆಂಗಳೂರು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.457 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## FOREST, ECOLOGY AND ENVIRONMENT SECRETARIAT

**Sub:** Diversion of 4.922 ha. of forest land for establishing Mini Hydel Project in favour of M/s Sai Spurthi Power Private Limited in Bangalore Rural Dist. reg.

**Read:** 1. Letter No. A5(5)GFL.CR-7/03-04, Dated: 26.9.2003, 24.12.2003, 6.3.2004 of Principal Chief Conservator of Forests, Bangalore

2. State Government letter No. FEE 8 FLL 2003, dated: 22.10.2003 5.11.2003, 9.1.2004, 16.2.2004 and 11.3.2004.

3. Letter No. F©A/16.1/KAR/63/Min, dated:21.11.2003 of Government of India, Ministry of Environment and Forests, Regional Office(South Zone), Bangalore.

4. Letter No. F©A/11.2/271/KAR/HEP, dated: 5.2.2004 and 17.3.04. of Government of India, Ministry of Environment and Forests, Regional Office(South Zone), Bangalore.

**PREAMBLE:**

The Principal Chief Conservator of Forests, Bangalore vide his letter dated 26.9.2003 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 4.922 ha. of forest land in Chunchi West Reserve Forest Sy.No. 31 of Harashivanahalli Village and Sy.No. 74 of Mullahalli Village of Sathanur Range in Kanakapura Taluk,Bangalore Rural District for establishing a Mini Hydel Project in favour of M/s Sai Spurthi Power Pvt. Ltd., Bangalore subject to certain conditions.

Accordingly, the proposal was recommended to Government of India vide State Government letter dated 22.10.2003 read at(2) above.

The Government of India, Ministry of Environment and Forests, Regional Office, South Zone, Bangalore vide their letter dated 21.11.2003 read at (3) above sought the views of the Principal Chief Conservator of Forests(Wildlife) regarding location of the project in the proposed area and the same was

communicated to Principal Chief Conservator of Forests, Bangalore vide State Government letter dated 25.11.2003 read at(2) above. In turn the Principal Chief Conservator of Forests, Bangalore vide his letter dated 24.12.2003 read at (1) above has furnished the views of Principal Chief Conservator of Forests(Wildlife),Bangalore and the same has been sent to Government of India vide State Government letter dated 9.1.2004 read at (2) above.

The Government of India Ministry of Environment and Forests, Regional Office, South Zone, Bangalore vide their letter dated 5.2.2004 read at (4) above has given its approval in principle(Stage-I) subject to fulfillment of certain conditions and the same was communicated to the Principal Chief Conservator of Forests, Bangalore for compliance vide State Government letter dated 16.2.2004 read at (2) above.

The Principal Chief Conservator of Forests, Bangalore vide in his letter dated 6.3.2004 read at (1) above has furnished the compliance report stating that an extent of 13 acres of non-forest land in Sy.No. 1 of Mudalaswamykuppe village of Kanakapura Taluk, Bangalore Rural District has been identified and mutated in favour of Forest Department vide Mutation Register No.2/03-04, dated: 27.10. 2003 and the user agency has paid the cost of compensatory afforestation and the Net Present Value of the forest land at the rate fixed by the State Government. The same has been sent to Government of India vide State Government letter dated: 11.3.2004 read at (2) above.

Finally, Government of India Ministry of Environment and Forests, Regional Office(South Zone), Bangalore vide their letter dated 17.3.2004 read at (4) above has conveyed its approval (Stage-II) under Section 2 of Forest (Conservation)Act,1980 for diversion of 4.922 ha. of forest land in Chunchi West RF Sy.No. 31 of Harashivanahalli Village and Sy.No.74 of Mullahalli Village of Sathanur Range in Kanakapura Taluk, Bangalore Rural District for establishing a Mini Hydel Project in favour of Sai Spurti Power Pvt. Ltd., Bangalore subject to certain conditions.

The proposal has been examined in detail and hence the order.

**GOVERNMENT ORDER NO. FEE 8 FLL 2003, BANGALORE, DATED: 23rd April 2004**

In the Circumstances explained in the preamble above Government are pleased to accord sanction under Section 2 of Forest (Conservation) Act,1980 for diversion of 4.922 ha. of forest land in Chunchi West RF Sy.No. 31 of Harashivanahalli Village and Sy.No.74 of Mullahalli Village of Sathanur Range in Kanakapura Taluk, Bangalore Rural District for establishing a Mini Hydel Project in favour of Sai Spurti Power Pvt. Ltd., Bangalore subject to the following conditions:

1. The legal Status of the forest land shall remain unchanged.
2. The period of lease is for 30 years.
3. The user agency has to pay the lease rent as fixed by the Government from time to time.
4. The Compensatory Afforestation shall be raised over 5 ha. of identified non-forest land at Sy.No.1 of Mudalaswamykuppe Village of Kanakapura Taluk, Bangalore Rural District at the cost of user agency. The Principal Chief Conservator of Forests, Karnataka shall obtain the prior permission of central government for change of location and schedule of compensatory afforestation, if any.
5. The non-forest land for compensatory afforestation shall be notified by the State Government as Reserve Forest under Section-4 or Protected Forest under Section-29 of the Indian Forest Act,1927 or the Karnataka Forest Act within a period of 6 months and Nodal Officer(Forest Conservation) shall report the compliance with in 6 months.
6. The total forest area utilized for the project shall not exceed 4.922 ha. In case the land is not utilized for the stipulated purpose with in one year or when it is no longer needed for stipulated purpose the area should automatically revert to the forest department. The Deputy Conservator of Forests concerned should take necessary action this regard.
7. A minimum level of water shall be maintained for wild animals in the dry season and the water body shall not be fenced.
8. The user agency shall abide by all the conditions imposed upon by the Government of India/Government of Karnataka/ Principal Chief Conservator of Forests, Karnataka.
9. The Karnataka Forest Act and Karnataka Forest Rules will be applicable for any violation.
10. The user agency should properly maintain the roads. All measures should be taken to avoid soil erosion.
11. The user agency should not sub lease the area.
12. There shall not be any type of construction of residential quarters either of the staff or labourers in the diverted forest land.
13. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

PR-458

**S.R.VATSALA**
Under Secretary to Government,
Forest, Ecology and Environment Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀಮತಿ ಎಲ್. ಮೇಘಲಾ, ಹಿಂದಿನ ಕೈಗಾರಿಕಾ ವಿಸ್ತರಣಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು, ಹಾಲಿ ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಪಂಚಾಯತ್, ಬೇಲೂರು, ಹಾಸನ ಜಿಲ್ಲೆ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇವರ ಅರೆ ಸರ್ಕಾರಿ ಪತ್ರಸಂಖ್ಯೆ: Compt/ Uplok/Mys 297/2002-03/DRE-4 ದಿನಾಂಕ: 12.02.2004.

**ಪ್ರಸ್ತಾವನೆ:**

ಶ್ರೀಮತಿ ಎಲ್. ಮೇಘಲಾ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರು ಹಿಂದೆ ಚಿಕ್ಕಮಗಳೂರು ಜಿಲ್ಲಾ ಪಂಚಾಯತ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಶ್ರೀಮತಿ ಹಸೀನಾ ಅನ್ವರ್, ಶಿಕ್ಷಕರು, ಶ್ರೀಮತಿ ನಾಗಮ್ಮ ಮಹಿಳಾ ಸಮಾಜ, ಚಿಕ್ಕಮಗಳೂರು, ಇವರಿಗೆ ಗೌರವ ಧನ ರೂ.2,000.00 ದಲ್ಲಿ ಪ್ರತಿ ತಿಂಗಳೂ ರೂ.500.00 ಗಳನ್ನು ಕಡಿಮೆ ನೀಡುತ್ತಿದ್ದರೆಂದೂ ಮತ್ತು ಈ ರೀತಿ ಒಟ್ಟು ರೂ. 20,000.00 ಗಳನ್ನು ವಂಚಿಸಿದ್ದಾರೆಂದೂ, ದಿನಾಂಕ: 20.8.1999 ರಂದು ನೀಡಲಾಗಿದ್ದ ಗೌರವ ಧನದ ರೂ. 2,000.00 ಚೆಕ್ಕನ್ನು ಫೋರ್ಜರಿ ಮಾಡಿ ಹಣ ಪಡೆಯಲು ಬ್ಯಾಂಕ್‌ಗೆ ನೀಡಿದಾಗ್ಗೆ ಬ್ಯಾಂಕ್‌ನವರು ಚೆಕ್ಕನ್ನು ಹಿಂದಿರುಗಿಸಿರುತ್ತಾರೆಂದೂ ಚಿಕ್ಕಮಗಳೂರು ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಇವರಿಗೆ ದೂರು ಸಲ್ಲಿಸಿರುವುದನ್ನು ಮಾನ್ಯ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12 (3)ರಡಿಯಲ್ಲಿ ಸರ್ಕಾರಕ್ಕೆ ವರದಿ ನೀಡಿದ್ದಾರೆ.

ಮೇಲೆ ಓದಲಾದ ಪತ್ರ ದಿನಾಂಕ: 12.02.2004 ರೊಡನೆ ಕರ್ನಾಟಕ ಲೋಕಾಯುಕ್ತ ನಿಬಂಧಕರು, ಮಾನ್ಯ ಲೋಕಾಯುಕ್ತರ ದಿನಾಂಕ: 11.2.2004ರ ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಶ್ರೀಮತಿ ಮೇಘಲಾ ಅವರು ಚೆಕ್ ಪಡೆದುಕೊಂಡಿದ್ದು, ಅದು ಅವರ ಸಂಪೂರ್ಣ ಸ್ವಾಧೀನದಲ್ಲಿದ್ದ ಅಂಶವನ್ನು ತನಿಖಾ ಕಾಲದಲ್ಲಿ ಕಂಡು ಬಂದ ಕಾರಣ ಫೋರ್ಜರಿಯನ್ನು ಸದರಿ ಅಧಿಕಾರಿಯೇ ಮಾಡಿದ್ದಾರೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆ ಎಂದು ಆರಕ್ಷಕ ನಿರೀಕ್ಷಕರು ಅಭಿಪ್ರಾಯಪಟ್ಟಿರುವುದನ್ನು ಮಾನ್ಯ ಲೋಕಾಯುಕ್ತರು ಪರಿಶೀಲಿಸಿ ಸದರಿ ವರದಿಯು ಮೇಲ್ನೋಟಕ್ಕೆ ಸ್ವೀಕಾರ ಯೋಗ್ಯವೆಂದು ಕಂಡು ಬಂದಿರುವುದರಿಂದ ಆಪಾದಿತ ಅಧಿಕಾರಿಯಾದ ಶ್ರೀಮತಿ ಮೇಘಲಾ ಅವರು ಶ್ರೀಮತಿ ಹಸೀನಾ ಅವರನ್ನು ವಂಚಿಸುವ ದುರುದ್ದೇಶದಿಂದ ದೂರುದಾರರ ಸಹಿಯನ್ನು ಫೋರ್ಜರಿ ಮಾಡಿ ಗುರುತರವಾದ ಕರ್ತವ್ಯಲೋಪವನ್ನು ಎಸಗಿರುವುದು ಕಂಡು ಬಂದ ಕಾರಣ ಶ್ರೀಮತಿ ಮೇಘಲಾ ಅವರ ವಿರುದ್ಧ ಕೆ.ಸಿ.ಎಸ್. (ಸಿಸಿಎ) ನಿಯಮಗಳ ನಿಯಮ 14ಎ ರನ್ವಯ ಶಿಸ್ತು ಕ್ರಮ ಜರುಗಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಶ್ರೀಮತಿ ಮೇಘಲಾ ಅವರ ವಿರುದ್ಧ ಮಾನ್ಯ ಉಪ ಲೋಕಾಯುಕ್ತರಿಂದ ಇಲಾಖಾ ವಿಚಾರಣೆಗೆ ಗುರಿಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 35 ಕೈಸೇವಿ 2004, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 11ರಡಿಯಲ್ಲಿ ಶ್ರೀಮತಿ ಎಲ್. ಮೇಘಲಾ, ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಪಂಚಾಯತ್, ಬೇಲೂರು, ಇವರು ಕರ್ತವ್ಯ ಲೋಪ ಎಸಗಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಈ ಪ್ರಕರಣವನ್ನು ಕೆ.ಸಿ.ಎಸ್. (ಸಿಸಿಎ) ನಿಯಮಗಳು, 1957ರ ನಿಯಮ 14 ಎ ರನ್ವಯ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ, ಇವರಿಗೆ ಈ ಮೂಲಕ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್.460 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004 ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2004**

ಸರ್ಕಾರಿ ಆದೇಶ ಸಂಖ್ಯೆ ಅಪಜೀ 11 ಎಫ್‌ಡಿಪಿ 2004 ದಿನಾಂಕ 30ನೇ ಮಾರ್ಚ್ 2004ರ ಆದೇಶ ಭಾಗದ ಮೊದಲ ಕಂಡಿಕೆಯ ನಂತರ ಕೆಳಗಿನ ಕಂಡಿಕೆಗಳನ್ನು ಸೇರಿಸಿ ಓದಿಕೊಳ್ಳುವುದು;

"ಭದ್ರಾವತಿಯಲ್ಲಿರುವ ಮೆ: ಮೈಸೂರು ಕಾಗದ ಕಾರ್ಖಾನೆಗೆ ಮುತ್ತೋಡಿ ವಿಭಾಗದಿಂದ ಬೊಂಬನ್ನು ಕಡಿದು ಚಿಕ್ಕಮಗಳೂರು ಮುಖಾಂತರ ಸಾಗಿಸಲು ಸಾಗಣೆ ವೆಚ್ಚವು ಬಹಳ ದುಬಾರಿಯಾದ್ದರಿಂದ ಹಾಗೂ ಭದ್ರಾವತಿ ವಿಭಾಗದಲ್ಲಿ ಹೆಚ್ಚಾಗಿ ಅಕ್ರಮವಾಗಿ ಕಡಿದು ಉಳಿದಿರುವ ಬೊಂಬು ಇರುವುದರಿಂದ ಅವುಗಳನ್ನು ವೃಕ್ಷವೃದ್ಧಿ ಮತ್ತು ಪಾಲನೆ ದೃಷ್ಟಿಯಿಂದ ಜಾಗರೂಕತೆಯಿಂದ ಕಡಿತಲೆ ಮಾಡಬೇಕಾಗಿದ್ದು (these bamboos will require careful silvicultural working), ಅದಕ್ಕೆ ಹೆಚ್ಚಿನ ಹಣ ವ್ಯಯವಾಗುವುದರಿಂದ ಈ ರಿಯಾಯಿತಿಯನ್ನು ನೀಡಲಾಗಿದೆ.

ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತವು ಭದ್ರಾವತಿ ವಿಭಾಗದಲ್ಲಿ ಬೊಂಬು ಕಡಿತಲೆ ಸಂಬಂಧ ಸಿಲ್ವಿಕಲ್ಚರಲ್ ಕಾರ್ಯಾಚರಣೆ (silvicultural operations) ಮಾಡಿರುವುದನ್ನು ಖಚಿತ ಪಡಿಸಿಕೊಂಡ ನಂತರವೇ ಸಂಬಂಧಿತ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸದರಿ ಕಾರ್ಖಾನೆಗೆ ಬೊಂಬನ್ನು ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ವಿ. ಜಯಲಕ್ಷ್ಮಿ**

ಪಿ.ಆರ್.461 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ-1

**ಸಂಖ್ಯೆ: ಸಿಆಸುಇ 10 ಹೆಚ್‌ಹೆಚ್‌ಎಲ್ 2004 ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2004**

ದಿನಾಂಕ: 20.4.2004 (ಮಂಗಳವಾರ) ಹಾಗೂ 26.4.2004 (ಸೋಮವಾರ) ರಂದು ಕರ್ನಾಟಕ ರಾಜ್ಯದ ಲೋಕಸಭಾ ಕ್ಷೇತ್ರಗಳಲ್ಲಿ ಮತ್ತು ವಿಧಾನಸಭಾ ಕ್ಷೇತ್ರಗಳಲ್ಲಿ ನಡೆಯುವ ಚುನಾವಣೆಯ ಪ್ರಯುಕ್ತ ಲೋಕಸಭಾ ಮತ್ತು ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಬರುವ ರಾಜ್ಯ ಸರ್ಕಾರಿ ಕಛೇರಿಗಳಿಗೆ ಕೇಂದ್ರ ಸರ್ಕಾರದ ಕಛೇರಿಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಾರ್ಖಾನೆ, ಕೈಗಾರಿಕಾ ಸಂಸ್ಥೆಗಳಿಗೆ, ಶಿಕ್ಷಣ ಸಂಸ್ಥೆಗಳಿಗೆ, ಶಾಲಾ ಕಾಲೇಜುಗಳಿಗೆ, (ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ) ಸರ್ಕಾರವು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ. ಈ ರಜೆಯು ತುರ್ತು ಸೇವೆಗಳಿಗೆ ಅನ್ವಯಿಸುವುದಿಲ್ಲ.

ಚುನಾವಣಾ ಕಾರ್ಯಕ್ಕೆ ನಿಯೋಜಿಸಲ್ಪಟ್ಟ ಎಲ್ಲಾ ಸರ್ಕಾರಿ ನೌಕರರು ಸದರಿ ದಿನಾಂಕದಂದು ಚುನಾವಣಾ ಕಾರ್ಯದಲ್ಲಿ ಹಾಜರಾಗತಕ್ಕದ್ದು.

ದಿನಾಂಕ: 20.4.2004 ಹಾಗೂ 26.4.2004 ರಂದು ನಡೆಯುವ ಲೋಕಸಭಾ ಕ್ಷೇತ್ರಗಳ ಮತ್ತು ವಿಧಾನಸಭಾ ಕ್ಷೇತ್ರಗಳ ವಿವರಗಳನ್ನು ಅನುಬಂಧ (1)ರ ಅನುಬಂಧ (2) ರಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ರಾಜ್ಯ ಶಿಷ್ಟಾಚಾರ).

### ಅಧಿಸೂಚನೆ-2

**ಸಂಖ್ಯೆ: ಸಿಆಸುಇ 10 ಹೆಚ್‌ಹೆಚ್‌ಎಲ್ 2004 ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2004**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20.25.26 (ಪಿಯುಬಿ-1) ದಿನಾಂಕ: 15.6.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ 1881 (1881ರ ಅಧಿನಿಯಮ ಸಂಖ್ಯೆ:26)ರ 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ ದಿನಾಂಕ: 20.4.2004 ಮಂಗಳವಾರ ಹಾಗೂ 26.4.2004ರ ಸೋಮವಾರ ದಂದು ನಡೆಯುವ ಲೋಕಸಭಾ ಚುನಾವಣೆಗಳು ಹಾಗೂ ವಿಧಾನಸಭಾ ಚುನಾವಣೆಗಳ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಕೃತ ಬ್ಯಾಂಕುಗಳು, ಇತರೆ ಬ್ಯಾಂಕುಗಳು, ಜೀವವಿಮಾ ನಿಗಮ ಮುಂತಾದ ಕಛೇರಿಗಳಿಗೆ ಸರ್ಕಾರವು ಸಾರ್ವಜನಿಕ ರಜೆಯನ್ನು ಘೋಷಿಸಿದೆ. ಕ್ಷೇತ್ರಗಳ ವಿವರವನ್ನು ಅನುಬಂಧ-1 ಮತ್ತು 2 ರಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ರಾಜ್ಯ ಶಿಷ್ಟಾಚಾರ).

### ಅನುಬಂಧ-1

**ದಿನಾಂಕ: 20.4.2004ರ (ಮಂಗಳವಾರ) ರಂದು ಮತದಾನ ನಡೆಯಲಿರುವ ಲೋಕಸಭಾ ಕ್ಷೇತ್ರಗಳು ಹಾಗೂ ವಿಧಾನಸಭಾ ಕ್ಷೇತ್ರಗಳು ಹೆಸರು ಹಾಗೂ ಸಂಖ್ಯೆಗಳು.**

| ಲೋಕಸಭಾ ಕ್ಷೇತ್ರಗಳು | | | |
|---|---|---|---|
| 1 | ಬೀದರ್ (ಎಸ್.ಸಿ) | 9 | ಚಿಕ್ಕಬಳ್ಳಾಪುರ |
| 2 | ಗುಲ್ಬರ್ಗಾ | 10 | ಕೋಲಾರ (ಎಸ್.ಸಿ) |
| 3 | ರಾಯಚೂರು | 11 | ಕನಕಪುರ |
| 4 | ಕೊಪ್ಪಳ | 12 | ಬೆಂಗಳೂರು ಉತ್ತರ |
| 5 | ಬಳ್ಳಾರಿ | 13 | ಬೆಂಗಳೂರು ದಕ್ಷಿಣ |
| 6 | ದಾವಣಗೆರೆ | 27 | ಬಾಗಲಕೋಟೆ |
| 7 | ಚಿತ್ರದುರ್ಗ | 28 | ಬಿಜಾಪುರ |
| 8 | ತುಮಕೂರು | | |
| ವಿಧಾನಸಭಾ ಕ್ಷೇತ್ರಗಳು | | | |
| 1 | ಔರಾದ್ | 6 | ಬಸವ ಕಲ್ಯಾಣ |
| 2 | ಭಾಲ್ಕಿ | 7 | ಚಿಂಚೋಳಿ |
| 3 | ಹುಲಸೂರು (ಎಸ್.ಸಿ) | 8 | ಕಮಲಾಪುರ (ಎಸ್.ಸಿ) |
| 4 | ಬೀದರ್ | 9 | ಆಳಂದ |
| 5 | ಹುಮ್ನಾಬಾದ್ | 10 | ಗುಲ್ಬರ್ಗ |

ವಿಧಾನಸಭಾ ಕ್ಷೇತ್ರಗಳು

| | | | |
|---|---|---|---|
| 11 | ಶಹಬಾದ್ (ಎಸ್.ಸಿ) | 56 | ಕೊರಟಗೆರೆ |
| 12 | ಅಫಜಲ್‌ಪುರ | 57 | ತುಮಕೂರು |
| 13 | ಚಿತ್ತಾಪುರ | 58 | ಕುಣಿಗಲ್ |
| 14 | ಸೇಡಂ | 59 | ಹುಲಿಯೂರು ದುರ್ಗ |
| 15 | ಜೇವರ್ಗಿ | 60 | ಗುಬ್ಬಿ |
| 16 | ಗುರುಮಿಠಕಲ್ (ಎಸ್.ಸಿ) | 61 | ತುರುವೇಕೆರೆ |
| 17 | ಯಾದಗೀರ್ | 62 | ತಿಪಟೂರು |
| 18 | ಶಹಾಪುರ | 63 | ಚಿಕ್ಕನಾಯಕನಹಳ್ಳಿ |
| 19 | ಶೋರಾಪುರ | 64 | ಗೌರಿಬಿದನೂರು |
| 20 | ದೇವದುರ್ಗ (ಎಸ್.ಸಿ) | 65 | ಚಿಕ್ಕಬಳ್ಳಾಪುರ (ಎಸ್.ಸಿ) |
| 21 | ರಾಯಚೂರು | 66 | ಶಿಡ್ಲಘಟ್ಟ |
| 22 | ಕಲಮಾಲ | 67 | ಬಾಗೇಪಲ್ಲಿ |
| 23 | ಮಾನ್ವಿ | 68 | ಚಿಂತಾಮಣಿ |
| 24 | ಲಿಂಗಸುಗೂರು | 69 | ಶ್ರೀನಿವಾಸಪುರ |
| 25 | ಸಿಂಧನೂರು | 70 | ಮುಳಬಾಗಿಲು |
| 26 | ಕುಷ್ಟಗಿ | 71 | ಕೋಲಾರ ಗೋಲ್ಡ್ ಫೀಲ್ಡ್ (ಎಸ್.ಸಿ) |
| 27 | ಯಲಬುರ್ಗ | 72 | ಬೇತಮಂಗಲ (ಎಸ್.ಸಿ) |
| 28 | ಕನಕಗಿರಿ | 73 | ಕೋಲಾರ |
| 29 | ಗಂಗಾವತಿ | 74 | ವೇಮಗಲ್ |
| 30 | ಕೊಪ್ಪಳ | 75 | ಮಾಲೂರು |
| 31 | ಸಿರಗುಪ್ಪ | 76 | ಮಲ್ಲೇಶ್ವರಂ |
| 32 | ಕುರಗೋಡು | 77 | ರಾಜಾಜಿನಗರ |
| 33 | ಬಳ್ಳಾರಿ | 78 | ಗಾಂಧಿನಗರ |
| 34 | ಹೊಸಪೇಟೆ | 79 | ಚಿಕ್ಕಪೇಟೆ |
| 35 | ಸಂಡೂರು | 80 | ಬಿನ್ನಿಪೇಟೆ |
| 36 | ಕೂಡ್ಲಿಗಿ | 81 | ಚಾಮರಾಜಪೇಟೆ |
| 37 | ಕೊಟ್ಟೂರು | 82 | ಬಸವನಗುಡಿ |
| 38 | ಹಡಗಲಿ | 83 | ಜಯನಗರ |
| 39 | ಹರಪನಹಳ್ಳಿ (ಎಸ್.ಸಿ) | 84 | ಶಾಂತಿನಗರ (ಎಸ್.ಸಿ) |
| 40 | ಹರಿಹರ | 85 | ಶಿವಾಜಿನಗರ |
| 41 | ದಾವಣಗೆರೆ | 86 | ಭಾರತಿನಗರ |
| 42 | ಮಾಯಕೊಂಡ | 87 | ಜಯಮಹಲ್ |
| 43 | ಭರಮಸಾಗರ (ಎಸ್.ಸಿ) | 88 | ಯಲಹಂಕ (ಎಸ್.ಸಿ) |
| 44 | ಚಿತ್ರದುರ್ಗ | 89 | ಉತ್ತರಹಳ್ಳಿ |
| 45 | ಜಗಳೂರು | 90 | ವರ್ತೂರು |
| 46 | ಮೊಳಕಾಲ್ಮೂರು | 91 | ಕನಕಪುರ |
| 47 | ಚಳ್ಳಕೆರೆ | 92 | ಸಾತನೂರು |
| 48 | ಹಿರಿಯೂರು (ಎಸ್.ಸಿ) | 93 | ಚನ್ನಪಟ್ಟಣ |
| 49 | ಹೊಳಲ್ಕೆರೆ | 94 | ರಾಮನಗರಂ |
| 50 | ಹೊಸದುರ್ಗ | 95 | ಮಾಗಡಿ |
| 51 | ಪಾವಗಡ (ಎಸ್.ಸಿ) | 96 | ನೆಲಮಂಗಲ (ಎಸ್.ಸಿ) |
| 52 | ಶಿರಾ | 97 | ದೊಡ್ಡಬಳ್ಳಾಪುರ |
| 53 | ಕಳ್ಳಂಬೆಳ್ಳ | 98 | ದೇವನಹಳ್ಳಿ (ಎಸ್.ಸಿ) |
| 54 | ಬೆಳ್ಳಾವಿ | 99 | ಹೊಸಕೋಟೆ |
| 55 | ಮಧುಗಿರಿ (ಎಸ್.ಸಿ) | 100 | ಆನೇಕಲ್ (ಎಸ್.ಸಿ) |

ವಿಧಾನಸಭಾ ಕ್ಷೇತ್ರಗಳು

| | | | |
|---|---|---|---|
| 104 | ಮಳವಳ್ಳಿ (ಎಸ್.ಸಿ) | 215 | ಗುಳೇದಗುಡ್ಡ |
| 158 | ಚನ್ನಗಿರಿ | 216 | ಹುನಗುಂದ |
| 161 | ಹೊನ್ನಳ್ಳಿ | 217 | ಮುದ್ದೇಬಿಹಾಳ |
| 187 | ಮುಂಡರಗಿ | 218 | ಹೂವಿನ ಹಿಪ್ಪರಗಿ |
| 189 | ರೋಣ | 219 | ಬಸವನಬಾಗೇವಾಡಿ |
| 210 | ಜಮಖಂಡಿ | 220 | ಡಿ. ಕೋಟ |
| 211 | ಬೀಳಗಿ | 221 | ಬಿಜಾಪುರ |
| 212 | ಮುದೋಳ (ಎಸ್.ಸಿ) | 222 | ಬಳ್ಳೊಳ್ಳಿ (ಎಸ್.ಸಿ) |
| 213 | ಬಾಗಲಕೋಟೆ | 223 | ಇಂಡಿ |
| 214 | ಬಾದಾಮಿ | 224 | ಸಿಂಧಗಿ |

ಅನುಬಂಧ-2

ದಿನಾಂಕ: 26.4.2004ರ ಸೋಮವಾರದಂದು ಮತದಾನ ನಡೆಯುವ ಲೋಕಸಭಾ ಕ್ಷೇತ್ರಗಳು ಹಾಗೂ ವಿಧಾನಸಭಾ ಕ್ಷೇತ್ರಗಳು ಹೆಸರು ಹಾಗೂ ಸಂಖ್ಯೆಗಳು

| ಲೋಕಸಭಾ ಕ್ಷೇತ್ರಗಳು | | | |
|---|---|---|---|
| 14 | ಮಂಡ್ಯ | 21 | ಶಿವಮೊಗ್ಗ |
| 15 | ಚಾಮರಾಜನಗರ (ಎಸ್.ಸಿ) | 22 | ಕೆನರಾ |
| 16 | ಮೈಸೂರು | 23 | ಧಾರವಾಡ ದಕ್ಷಿಣ |
| 17 | ಮಂಗಳೂರು | 24 | ಧಾರವಾಡ ಉತ್ತರ |
| 18 | ಉಡುಪಿ | 25 | ಬೆಳಗಾಂ |
| 19 | ಹಾಸನ | 26 | ಚಿಕ್ಕೋಡಿ (ಎಸ್.ಸಿ) |
| 20 | ಚಿಕ್ಕಮಗಳೂರು | | |
| ವಿಧಾನಸಭಾ ಕ್ಷೇತ್ರಗಳು | | | |
| 101 | ನಾಗಮಂಗಲ | 124 | ಕೃಷ್ಣರಾಜನಗರ |
| 102 | ಮದ್ದೂರು | 125 | ಪಿರಿಯಾಪಟ್ಟಣ |
| 103 | ಕಿರುಗಾವಲು | 126 | ವೀರಾಜಪೇಟೆ (ಎಸ್.ಟಿ) |
| 105 | ಮಂಡ್ಯ | 127 | ಮಡಿಕೇರಿ |
| 106 | ಕೆರಗೋಡು | 128 | ಸೋಮವಾರಪೇಟೆ |
| 107 | ಶ್ರೀರಂಗಪಟ್ಟಣ | 129 | ಬೇಲೂರು (ಎಸ್.ಸಿ) |
| 108 | ಪಾಂಡವಪುರ | 130 | ಅರಸೀಕೆರೆ |
| 109 | ಕೃಷ್ಣರಾಜಪೇಟೆ | 131 | ಗಂಡಸಿ |
| 110 | ಹನೂರು | 132 | ಶ್ರವಣಬೆಳಗೊಳ |
| 111 | ಕೊಳ್ಳೇಗಾಲ (ಎಸ್.ಸಿ) | 133 | ಹೊಳೆನರಸಿಪುರ |
| 112 | ಬನ್ನೂರು | 134 | ಅರಕಲಗೂಡು |
| 113 | ಟಿ. ನರಸಿಪುರ (ಎಸ್.ಸಿ) | 135 | ಹಾಸನ |
| 114 | ಕೃಷ್ಣರಾಜ | 136 | ಸಕಲೇಶಪುರ |
| 115 | ಚಾಮರಾಜ | 137 | ಸುಳ್ಯ (ಎಸ್.ಸಿ) |
| 116 | ನರಸಿಂಹರಾಜ | 138 | ಪುತ್ತೂರು |
| 117 | ಚಾಮುಂಡೇಶ್ವರಿ | 139 | ವಿಟ್ಲ |
| 118 | ನಂಜನಗೂಡು | 140 | ಬೆಳ್ತಂಗಡಿ |
| 119 | ಸಂತೇಮಾರನಹಳ್ಳಿ (ಎಸ್.ಸಿ) | 141 | ಬಂಟ್ವಾಳ |
| 120 | ಚಾಮರಾಜನಗರ | 142 | ಮಂಗಳೂರು |
| 121 | ಗುಂಡ್ಲುಪೇಟೆ | 143 | ಉಲ್ಲಾಳ |
| 122 | ಹೆಗ್ಗಡದೇವನಕೋಟೆ (ಎಸ್.ಸಿ) | 144 | ಸುರತ್ಕಲ್ |
| 123 | ಹುಣಸೂರು | 145 | ಕೌಪ |

ವಿಧಾನಸಭಾ ಕ್ಷೇತ್ರಗಳು

| | | | |
|---|---|---|---|
| 146 | ಉಡುಪಿ | 178 | ಕಲಘಟಗಿ |
| 147 | ಬ್ರಹ್ಮಾವರ | 179 | ಕುಂದಗೋಳ |
| 148 | ಕುಂದಾಪುರ | 180 | ಶಿಗ್ಗಾಂವ್ |
| 149 | ಬೈಂದೂರು | 181 | ಹಾನಗಲ್ |
| 150 | ಕಾರ್ಕಳ | 182 | ಹಿರೇಕೆರೂರು |
| 151 | ಮೂಡಬಿದ್ರೆ | 183 | ರಾಣಿಬೆನ್ನೂರು |
| 152 | ಶೃಂಗೇರಿ | 184 | ಬ್ಯಾಡಗಿ(ಎಸ್.ಸಿ) |
| 153 | ಮೂಡಿಗೆರೆ (ಎಸ್.ಸಿ) | 185 | ಹಾವೇರಿ |
| 154 | ಚಿಕ್ಕಮಗಳೂರು | 186 | ಶಿರಹಟ್ಟಿ |
| 155 | ಬೀರೂರು | 188 | ಗದಗ |
| 156 | ಕಡೂರು | 190 | ನರಗುಂದ |
| 157 | ತರೀಕೆರೆ | 191 | ನವಲಗುಂದ |
| 159 | ಹೊಳೆಹೊನ್ನೂರು (ಎಸ್.ಸಿ) | 192 | ರಾಮದುರ್ಗ |
| 160 | ಭದ್ರಾವತಿ | 193 | ಪರಸಗಡ |
| 162 | ಶಿವಮೊಗ್ಗ | 194 | ಬೈಲಹೊಂಗಲ |
| 163 | ತೀರ್ಥಹಳ್ಳಿ | 195 | ತಿಪಟೂರು |
| 164 | ಹೊಸನಗರ | 196 | ಖಾನಾಪುರ |
| 165 | ಸಾಗರ | 197 | ಬೆಳಗಾಂ |
| 166 | ಸೊರಬ | 198 | ಉಚಗಾಂವ್ |
| 167 | ಶಿಕಾರಿಪುರ | 199 | ಬಾಗೇವಾಡಿ |
| 168 | ಶಿರಸಿ (ಎಸ್.ಸಿ) | 200 | ಗೋಕಾಕ್ (ಎಸ್.ಟಿ) |
| 169 | ಬಟ್ಕಳ | 201 | ಅರಬಾವಿ |
| 170 | ಕುಮಟಾ | 202 | ಹುಕ್ಕೇರಿ |
| 171 | ಅಂಕೋಲಾ | 203 | ಸಂಕೇಶ್ವರ |
| 172 | ಕಾರವಾರ | 204 | ನಿಪ್ಪಾಣಿ |
| 173 | ಹಳಿಯಾಲ | 205 | ಸದಲಗ |
| 174 | ಧಾರವಾಡ (ಗ್ರಾಮಾಂತರ) | 206 | ಚಿಕ್ಕೋಡಿ (ಎಸ್.ಸಿ) |
| 175 | ಧಾರವಾಡ | 207 | ರಾಯಬಾಗ (ಎಸ್.ಸಿ) |
| 176 | ಹುಬ್ಬಳ್ಳಿ | 208 | ಕಾಗವಾಡ |
| 177 | ಹುಬ್ಬಳ್ಳಿ ಗ್ರಾಮಾಂತರ | 209 | ಅಥಣಿ |

**ಎಸ್. ಜಿಯಾವುಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ರಾಜ್ಯ ಶಿಷ್ಟಾಚಾರ).

ಪಿ.ಆರ್.449

## COMMERCE AND INDUSTRIES SECRETARIAT

**Sub :** Entrustment of audit of accounts of KIADB under section 19(3) of C & AG's DPC Act 1971-reg.

**Read :** Letter No. IADB: 1276: 03-04, dated: 16.2.04 of the CEO & EM, KIADB, Bangalore.

**Preamble:**

The Chief Executive Officer and Executive Member, KIADB in his letter dated: 16.2.04 read at (1) above has requested the Government to appoint the Chartered Accountant to KIADB to entrustment of Audit of the Accounts of KIADB for the Year 2003-04.

Hence, the following order;

**Govt Order No. CI 76 SPQ 2004, Bangalore, dated: 16th April 2004.**

Government is pleased to appoint the Accountant General Bangalore as statutory auditors for conducting audit of accounts of KIADB for the year 2003-04.

This order issued with the concurrence of FD Vide U.O. Note No. FD 471 EXP-1/04,dated: 5.4.04.

By Order and in the Name of the Governor of Karnataka,

**M. SHIVALINGASWAMY**
Under Secretary to Government (ID),
Commerce & Industries Department.

PR-462

## ಸಹಕಾರ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಸಇ 91 ಎಂಆರ್‌ಇ 2004 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2004**

ಶ್ರೀ ಜಿ. ಶರಶ್ಚಂದ್ರ ರಾನಡೆ, ಇವರನ್ನು ರಾಯಚೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಜರುಗಿವೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಇಲಾಖಾ ವಿಚಾರಣೆ ಕೈಬಿಟ್ಟು ದೋಷಮುಕ್ತರು ಎಂದು ಘೋಷಿಸಲಾದ ಸರ್ಕಾರದ ಆದೇಶ ಸಂಖ್ಯೆ: ಸಮಾತೂ 103 ಮಾಇಸೇ 2000(ಭಾಗ) ದಿನಾಂಕ: 11.12.2003ರ ಆದೇಶ ಭಾಗದ ಮೊದಲನೇ ಕಂಡಿಕೆಯ ಕೊನೆಯ ಸಾಲಿನಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರ ಅಮಾನತ್ತು ಅವಧಿಯನ್ನು ಕರ್ತವ್ಯ ಎಂದು ಸಕ್ರಮಗೊಳಿಸಲಾಗಿದೆ ಎಂದು ಸೇರ್ಪಡೆ ಮಾಡಿ ಓದುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಜಾಪಾಲಿ**

ಪಿ.ಆರ್.463 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಜಂಟಿ ಇ ಲಾಖಾ ವಿಚಾರಣೆ-೧) ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್ ೨) ಶ್ರೀ ವಿಶ್ವನಾಥ, ಪ್ರ.ದ.ಸ. ೩) ಶ್ರೀ ಮಾಚ ಕಲ್ಲಪ್ಪ, ಪ್ರ.ದ.ಸ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ಅವರುಗಳ ವಿರುದ್ಧ- ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
೧. ನೋಟೀಸ್ ಸಂಖ್ಯೆ: ಸಿಆಸುಇ ೭೪ ಎಸ್‌ಇ ಎನ್ ೨೦೦೨ ದಿನಾಂಕ ೧೭.೫.೨೦೦೩ ಮತ್ತು ೧೯.೫.೨೦೦೩.
೨. ಶ್ರೀ ರವಿಕುಮಾರ್ ಕಮಲಾಪುರಕರ್‌ರವರ ದಿನಾಂಕ ೨೭.೫.೦೩ರ ಲಿಖಿತ ಹೇಳಿಕೆ
೩. ಶ್ರೀ ವಿಶ್ವನಾಥ ರವರ ದಿನಾಂಕ ೨೦.೬.೦೩ರ ಲಿಖಿತ ಹೇಳಿಕೆ
೪. ಶ್ರೀ ಮಾಚ ಕಲ್ಲಪ್ಪ ರವರ ದಿನಾಂಕ ೨೦.೬.೦೩ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:-**

ಬೀದರ್ ಜಿಲ್ಲಾ ಪಂಚಾಯತ್ ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇ ಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿ ಇ ಲ್ಲದ, ಇ ಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylate and Bio-Adesive ಎಂಬ ರಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್, ಶ್ರೀ ವಿಶ್ವನಾಥ, ಪ್ರ.ದ.ಸ. ಶ್ರೀ ಮಾಚ ಕಲ್ಲಪ್ಪ, ಪ್ರ.ದ.ಸ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ಇ ವರುಗಳಿಗೆ ಮೇಲೆ (೧) ರಲ್ಲಿ ಓದಲಾದ ದಿನಾಂಕ ೧೭.೫.೨೦೦೩ ಮತ್ತು ೧೯.೫.೨೦೦೩ ರ ನೋಟೀಸ್‌ಗಳನ್ನು ನೀಡುವ ಮೂಲಕ ಇ ಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸ್ ಗೆ ಮೇಲೆ ಕ್ರಮ ಸಂಖ್ಯೆ: ೨ ರಿಂದ ೪ ರಲ್ಲಿ ಓದಲಾದ ದಿನಾಂಕ ೨೭.೫.೦೩ ಮತ್ತು ೨೦.೬.೦೩ರ ಲಿಖಿತ ಉತ್ತರಗಳನ್ನು ಸಲ್ಲಿಸಿದ ಅಧಿಕಾರಿ/ನೌಕರರು ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಠಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ ೭೪ ಎಸ್.ಇ ಎನ್ ೨೦೦೨ ಬೆಂಗಳೂರು ದಿನಾಂಕ ೦೭ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೨) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್, ಶ್ರೀ ವಿಶ್ವನಾಥ, ಪ್ರ.ದ.ಸ. (ಉಗ್ರಾಣ ಸಹಾಯಕರು) ಶ್ರೀ ಮಾಚ ಕಲ್ಲಪ್ಪ, ಪ್ರ.ದ.ಸ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ಇ ವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು, ರವರನ್ನು ವಿಚಾರಣಾಧಿಕಾರಿ ಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೫) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಆಡಳಿತಾಧಿಕಾರಿ (ಕುಟುಂಬ ಕಲ್ಯಾಣ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇ ಲಾಖೆ ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇ ತ್ಯಾದಿಗಳನ್ನು ಒದಗಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇ ಲಾಖೆ, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ.

ಸರ್ಕಾರಿ ಅದೇಶ ಕ್ರಮಾಂಕ ಸಿಆಸುಇ ೭೪ ಎಸ್‌ಇ ಎನ್ ೨೦೦೨(೧) ದಿನಾಂಕ ೭-೦೪-೦೪ ರಲ್ಲಿನ ಉಳಿದ ನಿಬಂಧನೆಗಳು ಈ ಪ್ರಕರಣಕ್ಕೂ ಅನ್ವಯಿಸುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್.451 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-೩).

**ವಿಷಯ:** ಶ್ರೀ ಪಿ.ಸಿ.ಜಯಣ್ಣ, ಕೆಎಎಸ್ ಆಧಿಕಾರಿ, ಶ್ರೀ ಟಿ.ಟಿ.ಮಲ್ಲಿಕಾರ್ಜುನ, ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ಬಿ.ಸಿ.ಕರುಣಾಕರ್, ಸಹಾಯಕ ಶಿಕ್ಷಕ ಅವರುಗಳ ವಿರುದ್ಧ ಇ ಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ೧. ಸರ್ಕಾರಿ ಆದೇಶ ಸಂ.ಸಿಆಸುಇ ೬೮ ಎಸ್‌ಇ ಎನ್ ೨೦೦೧ ದಿನಾಂಕ ೩.೧.೨೦೦೨.

೨. ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-೪, ಕರ್ನಾಟಕ ಲೋಕಾಯುಕ್ತ ಅವರ ವರದಿ ಸಂಖ್ಯೆ: ಲೋಇ /ಎಆರ್‌ಇ -೪/ಇ ಎನ್‌ಕ್ಯೂ ೫೩/೨೦೦೨-೦೩ ದಿನಾಂಕ ೨೯.೧೦.೨೦೦೩.

೩. ಲೋಕಾಯುಕ್ತರ ವರದಿ ಸಂಖ್ಯೆ:ಎಲ್.ಒ.ಕೆ.ಎ.ಆರ್.ಇ -೪ ಇ ಎನ್‌ಕ್ಯೂ ೫೩/೨೦೦೨-೦೩ ದಿನಾಂಕ ೨೪.೧೨.೦೩.

**ಪ್ರಸ್ತಾವನೆ:-**

ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ತಾಲ್ಲೂಕಿನ ಬುಲ್ಲೇನಹಳ್ಳಿ ನಿವಾಸಿ ಶ್ರೀ ಬಿ.ಸಿ.ಕರುಣಾಕರ್ ಬಿನ್ ಚೌಡೇಗೌಡ ಎಂಬುವವರ ಅವಿಭಕ್ತ ಕುಟುಂಬದ ವಾರ್ಷಿಕ ಆದಾಯವು ರೂ.೨,೫೦,೦೦೦/- ಆಗಿದ್ದರೂ ಸಹ ೧೦ ಸಾವಿರ ರೂಪಾಯಿಗಳೆಂದು ತಪ್ಪು ಆದಾಯ ಪ್ರಮಾಣ ಪತ್ರ ನೀಡಿ ಹಿಂದುಳಿದ ವರ್ಗಗಳ ಮೀಸಲಾತಿಯು ಅನರ್ಹರ ಪಾಲಾಗಲು ಕಾರಣರಾದ ಹಾಗೂ ಇ ವುಗಳನ್ನು ಅರ್ಹತೆ ಇ ಲ್ಲದಿದ್ದರೂ ಪಡೆದು ಶಿಕ್ಷಕರಾಗಿ ಆಯ್ಕೆಯಾದ ಆರೋಪಕ್ಕಾಗಿ ಶ್ರೀ ಪಿ.ಸಿ.ಜಯಣ್ಣ, ಕೆಎಎಸ್ ಹಿಂದಿನ ತಹಸೀಲ್ದಾರ್, ಶ್ರೀ ಟಿ.ಟಿ.ಮಲ್ಲಿಕಾರ್ಜುನ, ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ಬಿ.ಸಿ.ಕರುಣಾಕರ್, ಸಹಾಯಕ ಶಿಕ್ಷಕ ಅವರುಗಳ ವಿರುದ್ಧ ಮೇಲೆ (೧) ರಲ್ಲಿ ಓದಲಾದ ದಿನಾಂಕ ೩.೧.೨೦೦೨ರ ಸರ್ಕಾರಿ ಆದೇಶದಲ್ಲಿ ಸಿ.ಸಿ.ಎ ನಿಯಮ ೧೪-ಎ ರನ್ವಯ ಇ ಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-೪, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ (೨) ರಲ್ಲಿ ಓದಲಾದ ದಿನಾಂಕ ೨೯.೧೦.೨೦೦೩ರ ವಿಚಾರಣಾ ವರದಿ ಸಲ್ಲಿಸಿ-ಪ್ರಕರಣದಲ್ಲಿ ಫಿರ್ಯಾದಿಯು ದೂರು ಸಲ್ಲಿಸುವಾಗ ಸರಿಯಾದ ಮಾಹಿತಿಯನ್ನು ಪಡೆದು ಸಲ್ಲಿಸಿಲ್ಲ. ೩ನೇ ಆರೋಪಿಯು ಅವಿಭಕ್ತ ಕುಟುಂಬದಿಂದ ಬೇರ್ಪಟ್ಟು ಕೇವಲ ೧ ಎಕರೆ ೨ ಗುಂಟೆ ಜಮೀನನ್ನು ಮಾತ್ರ ಹೊಂದಿದ್ದಾರೆ. ಈ ಅಂಶವನ್ನು ತನಿಖಾಧಿಕಾರಿಯು ಗಣನೆಗೆ ತೆಗೆದು ಕೊಂಡಿಲ್ಲ. ಆದ್ದರಿಂದ ಆರೋಪ ಸಾಬೀತಾಗಿಲ್ಲ ಎಂಬ ನಿರ್ಣಯ ನೀಡಿದರು. ಇ ದನ್ನು ಪರಾಮರ್ಶಿಸಿದ ಸನ್ಮಾನ್ಯ ಲೋಕಾಯುಕ್ತರು ಆರೋಪಿಗಳನ್ನು ಮುಕ್ತರನ್ನಾಗಿಸಲು ಶಿಫಾರಸ್ಸು ಮಾಡಿದ್ದಾರೆ. ಇ ವುಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ ಸಿಆಸುಇ ೬೮ ಎಸ್‌ಇ ಎನ್ ೨೦೦೧ ಬೆಂಗಳೂರು ದಿನಾಂಕ ೭ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಪಿ.ಸಿ.ಜಯಣ್ಣ, ಕೆಎಎಸ್, ಉಪ ವಿಭಾಗಾಧಿಕಾರಿ, ಹಾಸನ, ಶ್ರೀ ಟಿ.ಟಿ.ಮಲ್ಲಿಕಾರ್ಜುನ, ಕಂದಾಯ ನಿರೀಕ್ಷಕ, ಕೆ.ಶೆಟ್ಟಿಹಳ್ಳಿ ಹೋಬಳಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಮತ್ತು ಶ್ರೀ ಬಿ.ಸಿ ಕರುಣಾಕರ, ಸಹಾಯಕ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಬನ್ನಂಗಡಿ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ ರವರುಗಳನ್ನು ದಿನಾಂಕ ೩.೧.೨೦೦೨ರ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ. ಈ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್.452 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-೩).

**ವಿಷಯ:** ಜಂಟಿ ಇ ಲಾಖಾ ವಿಚಾರಣೆ- ೧) ಶ್ರೀ ವೈ.ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ, ಹಿಂದಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ೨) ಡಾ.ಕೆ. ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬೀದರ್ ೩) ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಅವರುಗಳ ವಿರುದ್ಧ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ೧. ನೋಟೀಸ್ ಸಂಖ್ಯೆ: ಸಿಆಸುಇ ೭೪ ಎಸ್‌ಇ ಎನ್ ೨೦೦೨ ದಿನಾಂಕ ೩.೪.೦೩, ೧೭.೫.೨೦೦೩ ಹಾಗೂ ೨೦.೫.೨೦೦೩.

೨. ಶ್ರೀ ವೈ.ಸದಾಶಿವ ರವರ ದಿನಾಂಕ ೭.೫.೨೦೦೩ರ ಲಿಖಿತ ಹೇಳಿಕೆ

೩. ಡಾ.ಕೆ.ಸುಂದರಮ್ಮ ನವರ ೭.೫.೨೦೦೩ರ ಲಿಖಿತ ಹೇಳಿಕೆ

೪. ಶ್ರೀ ಸೈಯದ್ ಸತ್ತಾರ್ ರವರ ದಿನಾಂಕ ೨೫.೬.೦೩ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:-**

ಬೀದರ್ ಜಿಲ್ಲಾ ಪಂಚಾಯತ್ ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇ ಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿ ಇ ಲ್ಲದ, ಇ ಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylate and Bio-Adesive ಎಂಬ ರಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ವೈ.ಸದಾಶಿವ, ಕೆಎಎಸ್, ಹಿಂದಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಬೀದರ್ ಜಿಲ್ಲಾ ಪಂಚಾಯತ್, ಡಾ.ಕೆ.ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಬೀದರ್, ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್, ಇ ವರುಗಳಿಗೆ ಕ್ರಮವಾಗಿ ಮೇಲೆ (೧) ರಲ್ಲಿ ಓದಲಾದ ದಿನಾಂಕ ೩.೪.೦೩, ೧೭.೫.೨೦೦೩ ಹಾಗೂ ೨೦.೫.೨೦೦೩ ರ ನೋಟೀಸ್‌ಗಳನ್ನು ನೀಡುವ ಮೂಲಕ ಇ ಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸ್ ಗೆ ಮೇಲೆ ಕ್ರಮ ಸಂಖ್ಯೆ: ೨ ರಿಂದ ೪ ರಲ್ಲಿ ಓದಲಾದ ದಿನಾಂಕ ೭.೫.೦೩ ಮತ್ತು ೨೫.೬.೦೩ರ ಲಿಖಿತ ಉತ್ತರಗಳನ್ನು ಸಲ್ಲಿಸಿದ ಅಧಿಕಾರಿಗಳು ತಮ್ಮ ಮೇಲೆ ಹೊರಿಸಲಾದ

ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಠಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ ೭೪ ಎಸ್‌ಇ ಎನ್ ೨೦೦೨(೧) ಬೆಂಗಳೂರು ದಿನಾಂಕ ೦೭ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧ ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ೨೧೪ ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವೈ.ಸದಾಶಿವ, ನಿವೃತ್ತ ಕೆಎಎಸ್, ಹಿಂದಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಬೀದರ್ ಜಿಲ್ಲಾ ಪಂಚಾಯತ್, ಡಾ.ಕೆ.ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಬೀದರ್, ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು, ಬೀದರ್ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಇ ವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು, ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ ೩ ಸೇಇ ವಿ ೯೬ ದಿನಾಂಕ ೨೪.೪.೧೯೯೪ ರಂತೆ ಗೌರವ ಧನ ಹಾಗೂ ಆದೇಶ ಸಂಖ್ಯೆ: ಸಿಆಸುಇ ೪೫ ಸೇಇ ವಿ ೨೦೦೧ ದಿನಾಂಕ ೪.೩.೨೦೦೨ ರಂತೆ ವಾಹನ ಭತ್ಯೆಗಳನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೧(೫) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಆಡಳಿತಾಧಿಕಾರಿ (ಕುಟುಂಬ ಕಲ್ಯಾಣ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇ ಲಾಖೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿ ಗಾರರ ಸೇವೆ ಇ ತ್ಯಾದಿಗಳನ್ನು ಒದಗಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇ ಲಾಖೆ, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್.453 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-೩).

**INFRASTRUCTURE DEVELOPMENT SECRETARIAT**

**Subject :** Release of funds in 2003-04 for the Hassan-Mangalore Gauge Conversion Project

**Read :**
1. G. O. No. IDD 11 NSW 2001, dated 22.10.2001.
2. G. O. No. IDD 11 NSW 2001, dated 31.03.2003
3. G. O. No. 41 NSW 2003, dated 12.9.2003
4. G. O. No. IDD 41 NSW 2003, dated: 4.11.2003.
5. Letter No. W. 63/B/CN/BNC/Genl dated: 5.4.2004 from the Chief Engineer (Construction), SW Railway, Bangalore.

**Preamble:**

1. In the Government Order read at (1) above, Government of Karnataka (GoK) had accorded sanction for incorporating a Special Purpose Vehicle (SPV) called the Hassan-Mangalore Rail Development Company (HMRDC) for implementing Hassan Mangalore Gauge Conversion Project (HMGCP). GoK and Ministry of Railways are expected to invest Rs. 45 crores each in the equity of HMRDC either directly or through K-RIDE.
2. In the Government Order read at (2) above Rs. 6.00 crores have been released to Railways towards the expenditure on the HMGCP, subject to condition that the said amount would be treated as the equity of Government of Karnataka in HMRDC after it is duly established.
3. On 29th April 2003, the Cabinet Committee on Economic Affairs, Government of India have approved formation of HMRDC. HMRDC Ltd. has since been incorporated on 1.7.2003 under the Companies Act 1956 The necessary project agreements would be signed shortly.
4. Meanwhile, in the letter read at 3 above, a request for a further release of Rs. 6 crore has been made Gok has considered the matter and decided to release Rs. 2 crores as equity amount of Government of Karnataka in the HMRDC in addition to Rs. 6.00 crores already released on 31.03.2003. Hence this order.
5. In the G.O. dated: 4.11.2003 read at (4) above, a further release of Rs. 5.00 Crores towards the expenditure on HMGCP has been made as advance towards equity of GoK in HMRDC.
6. In the letter dated 5th April 2004 read at (6) above the CE (Con), SWR has stated that the Railways have so far spent Rs. 70.00 Crores and the State Government has only deposited Rs. 23.00 Crores, thereby there is deficit of Rs. 45.00 Crores and the Railways have spent Rs. 47.00 Crores till 1.4.2003 i.e. Rs. 2.00 Crores in excess. As such he has requested the State Government to release the balance of Rs. 12.00 Crores immediately to complete the work of Sakleshpur-Subramanya Road section within the schedule time.
7. GoK has considered the matter and decided to release further amount of Rs. 5.00 Crores as equity of Gok in HMRDC. Hence the following order.

**Government Order No. IDD 40 NSW 2004 Bangalore dated: 28th April 2004**

1. In the circumstances explained in the preamble, the Government of Karnataka is pleased to sanction the release of Rs. 5.00 crores (Rupees Five crores only) towards the expenditure on the HMGCP. This amount would subsequently be converted as the equity of GoK in HMRDC.
2. The Director, HMRDC is authorized to draw the said amount on Payee's Receipt duly countersigned by the Under Secretary to Government, Infrastructure Development Department and deposit the same with the Financial Adviser and Chief Accounts Officer (Construction), Southern Railways, Bangalore.
3. This expenditure shall be met out of the Head of Account "5465-01-190-3-02-211 Hassan-Mangalore Gauge Conversion Project Investments (Plan)".
4. This order issues with the concurrence of Finance Department vide its U.O. Note No. FD 733/Exp-I/2004 dated 28.4.2004

By Order and in the name of the Governor of Karnataka,

PR-465

**T. B. Renuka Prasad**
Under Secretary to Government,
Infrastructure Development Department.

**ಕಂದಾಯ ಸಚಿವಾಲಯ**

**ವಿಷಯ :** ಚುನಾವಣಾ ಕಾರ್ಯನಿರ್ವಹಿಸುವಲ್ಲಿ ನಿರ್ಲಕ್ಷತೆ ತೋರಿರುವ ಹಾಗೂ ಚುನಾವಣಾ ಕೆಲಸಕ್ಕೆ ತೊಂದರೆ ಮಾಡಿರುವ ಆಪಾದನೆಗಳ ಮೇಲೆ ಶ್ರೀ ಎಸ್. ಆರ್. ಪಾಟೀಲ್, ತಹಶೀಲ್ದಾರ್, ಗಂಗಾವತಿ ಇವರ ವಿರುದ್ಧ ಇಲಾಖಾ ವಿಚಾರಣೆ-ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಚುನಾವಣಾಧಿಕಾರಿಗಳು ಹಾಗೂ ಪದನಿಮಿತ್ತ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಚುನಾವಣೆಗಳು) ಇವರ ಪತ್ರ ಸಂಖ್ಯೆ: ಸಿಆಸುಇ: 109:ಸಿಹೆಚ್‌ಯು:ಎಸ್‌ಐಎ: 2004, ದಿನಾಂಕ: 28.4.2004.

**ಪ್ರಸ್ತಾವನೆ:**

ಮುಖ್ಯ ಚುನಾವಣಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಚುನಾವಣೆಗಳು) ಇವರು ಮೇಲೆ ಓದಲಾದ ಪತ್ರದಲ್ಲಿ ಕೊಪ್ಪಳ ಜಿಲ್ಲಾಧಿಕಾರಿಗಳ ವರದಿಯನ್ನು ಆಧರಿಸಿ ಶ್ರೀ ಎಸ್.ಆರ್. ಪಾಟೀಲ್, ತಹಶೀಲ್ದಾರ್, ಗಂಗಾವತಿ ಇವರು ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕಗೊಂಡಿದ್ದರೂ ಸಹ ಇವರು ಚುನಾವಣಾ ಕೆಲಸದಲ್ಲಿ ಕಾಳಜಿ ವಹಿಸದೆ ದಿನಾಂಕ: 11.4.2004ರ ಮಧ್ಯಾಹ್ನ ಕೆಲಸಕ್ಕೆ ಗೈರು ಹಾಜರಾಗಿದ್ದು, ಚುನಾವಣಾ ಕೆಲಸಕ್ಕೆ ನಿಯೋಜಿಸಬೇಕಾದ ಸಿಬ್ಬಂದಿಯ ತರಬೇತಿಗಾಗಿ ಯಾವುದೇ ಪೂರ್ವಸಿದ್ಧತೆಗಳನ್ನು ಮಾಡಿಕೊಂಡಿರಲಿಲ್ಲ ಹಾಗೂ ಎಲೆಕ್ಟ್ರಾನಿಕ್ ಮತ ಯಂತ್ರಗಳ ತೃಪ್ತಿಕರ ಕಾರ್ಯನಿರ್ವಹಣೆ ಬಗ್ಗೆ ಅವುಗಳನ್ನು ಪರೀಕ್ಷಿಸುವ: ಸರಿಪಡಿಸುವ ಕೆಲಸ ನಡೆಯುತ್ತಿರುವಾಗ ಸಮಯಕ್ಕೆ ಸರಿಯಾಗಿ ಹಾಜರಾಗದೆ ಈ ಬಗ್ಗೆ ರಿಟರ್ನಿಂಗ್ ಅಧಿಕಾರಿಗಳಿಗೆ ಸಹಕಾರ ನೀಡದೆ ನಿರ್ಲಕ್ಷತೆಯಿಂದ ವರ್ತಿಸಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು, ಚುನಾವಣೆ ದಿನ ಹಾಗೂ ಚುನಾವಣೆಯ ಮರು ದಿನ ಅಂದರೆ 20.4.04 ಹಾಗೂ 21.4.2004 ರಂದು ಚುನಾವಣೆ ಕೆಲಸಕ್ಕೆ ಗೈರು ಹಾಜರಾಗಿದ್ದು, ಅಧಿಕಾರಿಯ ಈ ನಡತೆಯು ಚುನಾವಣೆ ಕೆಲಸಕಾರ್ಯದಲ್ಲಿ ನಿರ್ಲಕ್ಷತೆ ತೋರಿರುವುದಾಗಿದ್ದು, ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಚುನಾವಣಾಧಿಕಾರಿಗಳ ಪ್ರಸ್ತಾವನೆಯನ್ನು ಭಾರತ ಚುನಾವಣಾ ಆಯೋಗವು ಒಪ್ಪಿರುವುದರಿಂದ ಹಾಗೂ ಅಧಿಕಾರಿಯ ಕರ್ತವ್ಯಚ್ಯುತಿಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಮುಖ್ಯ ಚುನಾವಣಾಧಿಕಾರಿಗಳು, ಬೆಂಗಳೂರು ಇವರ ಶಿಫಾರಸನ್ನು ಒಪ್ಪಿ ಶ್ರೀ ಎಸ್. ಆರ್. ಪಾಟೀಲ್, ತಹಶೀಲ್ದಾರ್, ಗಂಗಾವತಿ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 29 ಎಡಿಇ 2004, ಬೆಂಗಳೂರು, ದಿನಾಂಕ: 4ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 (1) (ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಆರ್. ಪಾಟೀಲ್, ತಹಶೀಲ್ದಾರ್ ಗಂಗಾವತಿ, ಕೊಪ್ಪಳ ಜಿಲ್ಲೆ ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿ, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಅನುಮತಿ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್.478

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಾಕ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 262 ಎಸ್ಎಎಸ್ 2001 ದಿನಾಂಕ: 31.3.2001.
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 262 ಎಸ್ಎಎಸ್ 2001 ದಿನಾಂಕ: 26.4.2002.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2003 ದಿನಾಂಕ: 23.7.2003.
4. ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಯೋಇ 623 ಪ್ರಕಾ 2004, ದಿನಾಂಕ: 6.4.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 31.3.2001ರ ಅಧಿಸೂಚನೆಯಲ್ಲಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ನಂತರ ಈ ಹುದ್ದೆಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು ಅಂತಿಮವಾಗಿ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 23.7.2003ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಆಪ್ತ ಕಾರ್ಯದರ್ಶಿಯವರು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 6.4.2004 ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 2004, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2004 ರಿಂದ 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ-ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು. ಪಿ. ಪ್ರಭು**

ಪಿ.ಆರ್.477 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲಾ ನೋಂದಣಿ ಕಛೇರಿಯನ್ನು ಸ್ಥಳಾಂತರಿಸುವ ಕುರಿತು.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆ ಸಂಖ್ಯೆ: ಬಿಎಲ್‌ಡಿ:13: 97-98 ದಿನಾಂಕ: 25.3.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 25.3.2004ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ, ದಾವಣಗೆರೆ ಜಿಲ್ಲಾ ನೋಂದಣಿ ಕಾರ್ಯಾಲಯವು 1998 ರಿಂದ ದಾವಣಗೆರೆ ನಗರ ಬಿನ್ನಿ ಕಂಪನಿ ರಸ್ತೆಯಲ್ಲಿರುವ ಗಂಗಾವತಿ ಸಿಲ್ಕ್ ಸ್ಯಾರಿ ಸೆಚಿಟರ್ ಅಂಗಡಿಯ ಮೇಲ್ಭಾಗದ 2ನೇ ಅಂತಸ್ತಿನಲ್ಲಿರುವ ಶ್ರೀ ಸಂತೋಷ ಪಾವಟೆ ಇವರ ಮಾಲೀಕತ್ವದ ಬಾಡಿಗೆ ಕಟ್ಟಡದಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಈ ಕಟ್ಟಡವು ನಗರದ ಅತೀ ಜನದಟ್ಟಣೆಯ ವ್ಯಾಪಾರಿ ಮಾರುಕಟ್ಟೆ ವಹಿವಾಟು ನಡೆಸುವ ಸ್ಥಳದಲ್ಲಿದ್ದು, ಇಲ್ಲಿ ವಾಹನಗಳ ಓಡಾಟದ ಗದ್ದಲವು ಹೆಚ್ಚಾಗಿದ್ದು, ಶಾಂತರೀತಿಯಿಂದ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲವೆಂದು ವರದಿ ಮಾಡಿ ಕಟ್ಟಡವು 2ನೇ ಅಂತಸ್ತಿನಲ್ಲಿದ್ದು, ಹತ್ತಿ ಇಳಿಯಲು ಕಡಿದಾದ ಮೆಟ್ಟಿಲುಗಳು ಇರುವುದರಿಂದ, ಸಾರ್ವಜನಿಕರಿಗೆ ಬಹಳ ಕಷ್ಟಕರವಾಗಿದ್ದು ಸಾರ್ವಜನಿಕರ ಹಿತದೃಷ್ಟಿಯಿಂದ ದಾವಣಗೆರೆ ನಗರದ ಪಿ.ಜೆ. ಬಡಾವಣೆಯ ಚರ್ಚ್ ರಸ್ತೆಯ ಸೇಂಟ್ ಥಾಮಸ್ ಚರ್ಚ್‌ನ ಎದುರು ಭಾಗದಲ್ಲಿರುವ ಚರ್ಚ್‌ನವರ ಮಾಲೀಕತ್ವದಲ್ಲಿರುವ ಮುನ್ಸಿಪಲ್ ಡೋರ್ ನಂ. 755/1ರ 14 ಗುಂಟೆಯಲ್ಲಿ ಕಟ್ಟಡವು ಒಟ್ಟು 2889 ಚ.ಅಡಿ ಸ್ಥಳಾವಕಾಶ ಹೊಂದಿದ್ದು, ಕಾರ್ಯಾಲಯದ ಉಪಯೋಗ ಹಾಗೂ ಮುಂದಾಗಬಹುದಾದ ಕೇಂದ್ರ ಅಭಿಲೇಖಾಲಯಕ್ಕೆ ಸೂಕ್ತ ಮತ್ತು ಸಾಕಷ್ಟು ಕ್ಷೇತ್ರ ಲಭ್ಯವಿದ್ದು, ಈ ಕಟ್ಟಡಕ್ಕೆ ಕಛೇರಿ ಸ್ಥಳಾಂತರಿಸಲು ನೋಂದಣಿ ಮಹಾಪರಿವೀಕ್ಷಕರು ಅನುಮೋದನೆ ಕೋರಿರುತ್ತಾರೆ. ಈ ಕಟ್ಟಡವು ನಗರದ ಮಧ್ಯ ಭಾಗದಲ್ಲಿದ್ದು, 14 ಗುಂಟೆ ಜಾಗೆಯ ವಿಸ್ತೀರ್ಣದ್ದಾಗಿರುತ್ತದೆ. ಸದರಿ ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆಯು ಮಾಸಿಕ ಬಾಡಿಗೆಯನ್ನು ನಿಗದಿಪಡಿಸಿದ ದರಕ್ಕಿಂತಲೂ ಕಡಿಮೆ ಬಾಡಿಗೆ ದರಕ್ಕೆ ಅಂದರೆ ತಿಂಗಳಿಗೆ ರೂ. 16,000/- (ರೂಪಾಯಿ ಹದಿನಾರು ಸಾವಿರ)ಗಳಿಗೆ ಬಾಡಿಗೆಗೆ ನೀಡಲು ಸೇಂಟ್ ಥಾಮಸ್ ಚರ್ಚ್‌ನ ಪಾದ್ರಿಗಳಾದ ಶ್ರೀ ಕ್ಲೆಮೆಂಟ್ ಡಿಸೋಜ ರವರು ಅನುಮತಿ ಪತ್ರ ನೀಡಿರುತ್ತಾರೆ.

ಆದ್ದರಿಂದ ಸೇಂಟ್ ಥಾಮಸ್ ಚರ್ಚ್‌ನ ಮಾಲೀಕತ್ವದಲ್ಲಿರುವ ಸಂಖ್ಯೆ: 755/1ರ ಕಟ್ಟಡವನ್ನು ಬಾಡಿಗೆಯ ಮೇಲೆ ಪಡೆಯಲು ಆದೇಶ ಕೋರಿ ಸಲ್ಲಿಸಿರುವ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 20 ಮುನೋಸ 2003, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲಾ ನೋಂದಣಾಧಿಕಾರಿಯವರ ಕಚೇರಿಯನ್ನು ಹಾಲೀ ಕಾರ್ಯನಿರ್ವಹಿಸುತ್ತಿರುವ ಕಟ್ಟಡದಿಂದ ದಾವಣಗೆರೆ ನಗರದ ಸೇಂಟ್ ಥಾಮಸ್ ಚರ್ಚ್ ಮಾಲೀಕತ್ವದ ಕಟ್ಟಡದ ಸಂಖ್ಯೆ: 755/1 (14 ಗುಂಟೆ ವಿಸ್ತೀರ್ಣದ 2889 ಚದರ ಅಡಿ)ರ ಖಾಸಗಿ ಕಟ್ಟಡಕ್ಕೆ ಮಾಸಿಕ ರೂ. 16,000-00 (ರೂಪಾಯಿ ಹದಿನಾರು ಸಾವಿರ) ಗಳ ಬಾಡಿಗೆ ಆಧಾರದ ಮೇಲೆ ಪಡೆದು ಕಛೇರಿಯನ್ನು ಸ್ಥಳಾಂತರಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಇದರಿಂದ ಉಂಟಾಗುವ ವೆಚ್ಚವನ್ನು 2004-2005 ನೇ ಸಾಲಿನ ಲೆಕ್ಕ ಶೀರ್ಷಿಕೆ "2030-03-001-072" ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಜಿ. ನಾರಾಯಣ**

ಪಿ.ಆರ್.476

ಪೀಠಾಧಿಕಾರಿ, ಕಂದಾಯ ಇಲಾಖೆ,

(ನೋಂದಣಿ ಮತ್ತು ಮುದ್ರಾಂಕ).

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಮಿಕ ಇಲಾಖಾ ಆಯುಕ್ತರ ಹುದ್ದೆಯಲ್ಲಿ ಶ್ರೀಯುತ ಸಂಜೀವ್‌ಕುಮಾರ್ ರವರನ್ನು ಮುಂದುವರೆಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 1 ಎಸ್‌ಎಎಸ್ 2003 ದಿನಾಂಕ: 22.1.2003

2. ಪತ್ರ ಸಂಖ್ಯೆ: ಸಿಓಎಲ್:ಐಎಎಸ್: 2002-2003 ದಿನಾಂಕ: 4.4.2003 ಮತ್ತು 27.3.2004 ಕಾರ್ಮಿಕ ಆಯುಕ್ತರು ಇವರಿಂದ

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 22.1.2003ರ ಸರ್ಕಾರಿ ಅಧಿಸೂಚನೆಯಲ್ಲಿ ಇತರೆ ಐ.ಎ.ಎಸ್. ಅಧಿಕಾರಿಗಳ ಜೊತೆ ಶ್ರೀ ಸಂಜೀವ್‌ಕುಮಾರ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹುದ್ದೆಯಿಂದ ಮುಂದಿನ ಆದೇಶವಾಗುವವರೆಗೆ ಕಾರ್ಮಿಕ ಇಲಾಖೆಯ ಆಯುಕ್ತರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಾರ್ಮಿಕ ಇಲಾಖೆಯ ಕಾರ್ಮಿಕ ಆಯುಕ್ತರ ಹುದ್ದೆಯನ್ನು ಹಿರಿಯ ವೇತನ ಶ್ರೇಣಿಯ ಐಎಎಸ್ ಅಧಿಕಾರಿಯನ್ನು ನೇಮಿಸುವ ಮೂಲಕ ತುಂಬಬಹುದಾಗಿದೆ.

ಆದ್ದರಿಂದ, ಶ್ರೀಯುತ ಸಂಜೀವ್‌ಕುಮಾರ್ ಇವರು ಸೂಪರ್ ಟೈ ಸ್ಕೇಲ್ ಕಾಲಿಕ ವೇತನ ಶ್ರೇಣಿ ರೂ. 18,400-500-22,400 ಅಧಿಕಾರಿಯಾಗಿದ್ದು ಸದರಿ ಅಧಿಕಾರಿಯು ದಿನಾಂಕ: 29.1.2003 ರಂದು ಪೂರ್ವಾಹ್ನ ಕಾರ್ಮಿಕ ಆಯುಕ್ತರ ಹುದ್ದೆಯ ಪ್ರಭಾರ ವಹಿಸಿಕೊಂಡಿರುತ್ತಾರೆ. ಸದರಿ ಅಧಿಕಾರಿಯು ಸೂಪರ್ ಟೈಂ ವೇತನ ಶ್ರೇಣಿಯಲ್ಲಿ 18,400-500-22,400 ಇದರಲ್ಲಿ ವೇತನ ಪಡೆಯಲು ಅನುಕೂಲವಾಗುವಂತೆ ದಿನಾಂಕ: 29.1.2003 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ (ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ) ಸೃಜಿಸಿ ಆದೇಶ ಹೊರಡಿಸುವಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಕೋರಿರುತ್ತಾರೆ. ಕಾರ್ಮಿಕ ಆಯುಕ್ತರ ಕೋರಿಕೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 151 ಎಲ್‌ಇಟಿ 2003, ಬೆಂಗಳೂರು ದಿನಾಂಕ: 30ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 1 ಎಸ್‌ಎಎಸ್ 2003 ದಿನಾಂಕ: 22.1.2003ರಲ್ಲಿ ಶ್ರೀಯುತ ಸಂಜೀವ್ ಕುಮಾರ್, ಐ.ಎ.ಎಸ್., ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರನ್ನು ಕಾರ್ಮಿಕ ಇಲಾಖೆಯ ಆಯುಕ್ತರ ಸೂಪರ್ ಟೈಂ ಸ್ಕೇಲ್ ಅಂದರೆ ವೇತನ ಶ್ರೇಣಿ 18,400-500-22,400 ಹುದ್ದೆಗೆ ನೇಮಿಸಿದ್ದು, ಅಧಿಕಾರಿಯು ಸದರಿ ಹುದ್ದೆಯ ಕಾರ್ಯಭಾರವನ್ನು ದಿನಾಂಕ: 29.1.2003 ರಿಂದ ವಹಿಸಿಕೊಂಡಿದ್ದು, ಸದರಿ ದಿನಾಂಕದಿಂದ ಸದರಿ ಅಧಿಕಾರಿಯು ಕಾರ್ಮಿಕ ಆಯುಕ್ತರಾಗಿ ಮುಂದುವರೆಯುವವರೆವಿಗೆ ಸೂಪರ್ ಟೈಂ ಸ್ಕೇಲ್ ವೇತನ ಪಡೆಯಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.475

**ಬಿ. ಎಂ. ಮಠಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.